KA / BG-GPO / 2515 / WPP-47 / 2006-2008

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೪, ೨೦೦೮ (ಭಾದ್ರಪದ ೧೩, ಶಕ ವರ್ಷ ೧೯೩೦) | ಸಂಚಿಕೆ ೩೬ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕಮಾಂಡೆಂಟ್‌ರವರ ಕಛೇರಿ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು**

**ಪ್ರಕಟಣೆ**

**ಸಂಖ್ಯೆ: ವಾಸಾವಿ–5/ಅನು.ವಾ/2007–08, ದಿನಾಂಕ: 30ನೇ ಜುಲೈ 2008**

**ವಿಷಯ:** ಈ ಘಟಕದ 03 ಸಂಖ್ಯೆ ಅನುಪಯುಕ್ತ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಕುರಿತು.

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ಪತ್ರ ಸಂ. ಹೆಚ್.ಡಿ./17/ಇ.ಎಂ.ವಿ./2008, ದಿನಾಂಕ: 05.06.2008.

2. ಆರಕ್ಷಕ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹಿಂಬರಹ ಸಂ. ವಾ.ಸಾ(1)59 2007–08, ದಿನಾಂಕ: 23.06.2008.

ಈ ಮೂಲಕ ಪ್ರಕಟಿಸುವುದೇನೆಂದರೆ, 5ನೇ ಪಡೆ, ಕೆ.ಎಸ್.ಆರ್.ಪಿ., ಲಲಿತ ಮಹಲ್ ರಸ್ತೆ, ಮೈಸೂರು–570011 ಇಲ್ಲಿ ಈ ಕೆಳಕಂಡ 03 ಸಂಖ್ಯೆ ಅನುಪಯುಕ್ತ ವಾಹನಗಳನ್ನು ದಿನಾಂಕ: 22.09.2008 ರಂದು ಬೆಳಿಗ್ಗೆ 11.00 ಗಂಟೆಗೆ 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರಿನ ವಾಹನ ಸಾರಿಗೆ ವಿಭಾಗದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಅನುಪಯುಕ್ತ ವಾಹನಗಳ ವಿವರ**

| ಕ್ರ. ಸಂ. | ವಾಹನದ ನೊಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 1. | ಸಿಎಜಿ–194 | ಹಿಂದೂಸ್ಥಾನ್ ಓಮಿನಿ ಬಸ್ | 1980 |
| 2. | ಸಿಎಜಿ–6613 | ಎನ್ ಫಿಲ್ಡ್ ಬುಲೇಟ್ ಮೋಟರ್ ಸೈಕಲ್ | 1983 |
| 3. | ಸಿಎಜಿ–6654 | ಎನ್ ಫಿಲ್ಡ್ ಬುಲೇಟ್ ಮೋಟರ್ ಸೈಕಲ್ | 1985 |

ಈ ಮೇರೆಗೆ ಇಚ್ಛೆಯುಳ್ಳವರು ಟೆಂಡರ್‌ನ್ನು ದ್ವಿ–ಪ್ರತಿಯಲ್ಲಿ ಮೊಹರು ಮಾಡಿದ ಲಕೋಟೆಯ ಮುಖಾಂತರ ದಿನಾಂಕ: 21.09.2008ರ 17.00 ಗಂಟೆಯೊಳಗೆ ಕಮಾಂಡೆಂಟ್, 5ನೇ ಪಡೆ, ಕೆ.ಎಸ್.ಆರ್.ಪಿ., ಲಲಿತಮಹಲ್ ರಸ್ತೆ, ಮೈಸೂರು–570011 ರವರ ವಿಳಾಸಕ್ಕೆ ತಲುಪುವಂತೆ ಕಳುಹಿಸುವುದು.

ಈ ಪ್ರಯುಕ್ತ ಯಾವುದಾದರೂ ಮಾಹಿತಿಯ ಅವಶ್ಯಕತೆಯಿದ್ದಲ್ಲಿ ಕಛೇರಿಯ ಅವಧಿಯಲ್ಲಿ ಖುದ್ದಾಗಿ ಪಡೆದುಕೊಳ್ಳಬಹುದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

**ಕೃಷ್ಣಪ್ಪ**
ಕಮಾಂಡೆಂಟ್,
5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು.

ಪಿ.ಆರ್. 438

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**
**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು – 560 001**
**ಟೆಂಡರ್ ಪ್ರಕಟಣೆ**
**ಸಂಖ್ಯೆ:ಕರಾಆ:ಆರ್ಥಿಕ:24:2005–06, ದಿನಾಂಕ: 11ನೇ ಆಗಸ್ಟ್ 2008**

**ವಿಷಯ:** ಜಿಲ್ಲಾ ಗ್ರಾಹಕರ ವೇದಿಕೆಗಳಲ್ಲಿರುವ 2 ಕಿಲೋವ್ಯಾಟ್ ಸಾಮರ್ಥ್ಯದ ಯುಪಿಎಸ್ ಉಪಕರಣಕ್ಕೆ 26AH ಸಾಮರ್ಥ್ಯದ ದರ ಪಟ್ಟಿಯನ್ನು ನೀಡುವ ಕುರಿತು.

**ಉಲ್ಲೇಖ:** ಕರಾಆ:ಆರ್ಥಿಕ:14:2005–06(ಭಾಗ) ದಿನಾಂಕ: 29.03.2008.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಆಸಕ್ತಿಯುಳ್ಳವರಿಗೆ ತಿಳಿಯಪಡಿಸುವುದೇನೆಂದರೆ, ಗ್ರಾಹಕ ಸಂರಕ್ಷಣಾ ಕಾಯ್ದೆ 1986ರನ್ವಯ ರಚಿತವಾಗಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಿಗೆ Integrated Project on Consumer Protection ರಡಿಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿರುವ 2KVA/96V Uninterruptible Power Supply System With Battery ES(GY) ಸಾಮರ್ಥ್ಯದ UPS ಬ್ಯಾಟರಿಗಳು ದುರ್ಬಲವಾಗಿದ್ದರಿಂದ ನೂತನ ಯುಪಿಎಸ್ ಉಪಕರಣಗಳನ್ನು ಖರೀದಿಸುವ ಸಲುವಾಗಿ ಟೆಂಡರ್ ಪ್ರಕಟಣೆಯನ್ನು ದಿನಾಂಕ:29.03.2008ರಲ್ಲಿ ಹೊರಡಿಸಲಾಗಿರುತ್ತದೆ, ಸದರಿ ಉಪಕರಣಕ್ಕೆ ಸಂಬಂಧಿಸಿದಂತೆ ದರ ನಿಷ್ಕರ್ಷೆಯ ನಂತರ ಅನಿವಾರ್ಯ ಕಾರಣಗಳಿಂದ ಸದರಿ ಉಪಕರಣವನ್ನು ಖರೀದಿಸುವ ಯೋಜನೆಯನ್ನು ಕೈಬಿಡಲಾಗಿರುತ್ತದೆ. ಪ್ರಸ್ತುತ ಬೆಳಗಾಂ ಮತ್ತು ಕೊಪ್ಪಳ ಜಿಲ್ಲಾ ವೇದಿಕೆಗಳನ್ನು ಹೊರತುಪಡಿಸಿ ಇತರೆ ಜಿಲ್ಲೆಗಳಲ್ಲಿರುವ ಜಿಲ್ಲಾ ವೇದಿಕೆಗಳಲ್ಲಿ ದುರ್ಬಲವಾಗಿರುವ ಹಾಗೂ ಕೆಲವು ನಿರ್ಜೀವವಾಗಿರುವ ಬ್ಯಾಟರಿಗಳನ್ನು ಬದಲಾಯಿಸುವ ಹಿನ್ನೆಲೆಯಲ್ಲಿ 26AH ಸಾಮರ್ಥ್ಯದ 200ಕ್ಕೂ ಹೆಚ್ಚಿನ ಪ್ರಮಾಣದ ಬ್ಯಾಟರಿಗಳನ್ನು ಖರೀದಿಸಲು ಉದ್ದೇಶಿಸಲಾಗಿರುತ್ತದೆ.

2Kilo Watt ಸಾಮರ್ಥ್ಯದ UPSಗೆ 26AH ಸಾಮರ್ಥ್ಯದ 1 (ಒಂದು) ಬ್ಯಾಟರಿಗೆ ತಗಲುವ (ಎಲ್ಲಾ ರೀತಿಯ ತೆರಿಗೆ, ಜೋಡಣೆ ಮತ್ತು ಸಾರಿಗೆ ವೆಚ್ಚವು ಸೇರಿದಂತೆ) ದರ ಹಾಗೂ ನಿರ್ಜೀವವಾಗಿರುವ ಹಳೆಯ ಬ್ಯಾಟರಿಗಳನ್ನು ಯಾವ ದರಕ್ಕೆ ಖರೀದಿಸುವಿರಿ ಎಂಬುದರ ಬಗ್ಗೆ ಈ ಕೆಳಕಂಡ ನಮೂನೆಯನ್ನು ಭರ್ತಿಮಾಡಿ ದರಪಟ್ಟಿಯನ್ನು ದಿನಾಂಕ:10.09.2008ರ ಸಂಜೆ 4–00 ಗಂಟೆಯೊಳಗೆ ಸೀಲ್ ಮಾಡಿದ ಲಕೋಟೆಯಲ್ಲಿ ರಾಜ್ಯ ಆಯೋಗಕ್ಕೆ ಸಲ್ಲಿಸಬಹುದು ಹಾಗೂ ಲಕೋಟೆಯ ಮೇಲೆ ಬ್ಯಾಟರಿಯನ್ನು ಖರೀದಿಸುವ ದರಪಟ್ಟಿ ಎಂಬುದಾಗಿ ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.

| ಬ್ಯಾಟರಿಯ ತಯಾರಿಕಾ ಸಂಸ್ಥೆ ಮತ್ತು ಮಾದರಿಯ ಹೆಸರು | ವ್ಯಾಟ್, ಸಾರಿಗೆ, ಜೋಡಣೆ ಸೇರಿದಂತೆ ಬ್ಯಾಟರಿಯ ದರ | ಶೇಕಡಾವಾರು ರಿಯಾಯಿತಿ ದರ ಮತ್ತು ಮೊಬಲಗು | ಹಳೆಯ ಬ್ಯಾಟರಿಯನ್ನು ಖರೀದಿಸಲು ಇಚ್ಚಿಸುವ ದರ | ನಿವ್ವಳ ಮೊತ್ತ |
|---|---|---|---|---|
| | | | | |

ಸಾಧ್ಯವಾದಲ್ಲಿ ಟೆಂಡರ್ ಅರ್ಜಿಗಳನ್ನು ಅಂದೇ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಯಾವುದೇ ಅಥವಾ ಎಲ್ಲಾ ಟೆಂಡರ್ ಅರ್ಜಿಗಳನ್ನು ಯಾವ ಕಾರಣವನ್ನು ನೀಡದೇ ತಿರಸ್ಕರಿಸುವ ಅಧಿಕಾರವನ್ನು ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಹೊಂದಿರುತ್ತಾರೆ. ಸಾಮಾಗ್ರಿಗಳ ಸಂಖ್ಯೆಯನ್ನು ಹೆಚ್ಚಿಸುವ ಅಥವಾ ಕಡಿಮೆ ಮಾಡುವ ಅಧಿಕಾರವನ್ನು ಸಹಾ ಈ ಕೆಳಗೆ ಸಹಿ ಮಾಡಿರುವವರು ಹೊಂದಿರುತ್ತಾರೆ.

ಟೆಂಡರ್ ಸಲ್ಲಿಸುವಂತಹವರು ಉತ್ತಮ ಗುಣಮಟ್ಟದ ಸಾಮಾಗ್ರಿಗಳನ್ನು ಸರಬರಾಜು ಮಾಡುವವರಾಗಿರಬೇಕು ಹಾಗೂ ಅವರ ವಿರುದ್ಧ ಯಾವುದೇ ಮೋಸ ಅಥವಾ ವಂಚನೆ ಪ್ರಕರಣಗಳು ಮತ್ತು ಕಪ್ಪು ಪಟ್ಟಿಯಲ್ಲಿ ಹೆಸರು ಇರಬಾರದು ಮತ್ತು ಅಂತಹ ಪ್ರಕರಣಗಳಿಗೆ ಗುರಿಯಾಗಿರಬಾರದು. ಟೆಂಡರ್ ಅನುಸಾರ ಬೆಲೆಯನ್ನು ನಿಗಧಿಪಡಿಸುವ ಸಾರ್ವಜನಿಕರಿಗೆ ತೆರಿಗೆ ಹಣದಿಂದ ಲಭ್ಯವಾಗುವ ಮತ್ತು ಭಾರತ ಸರ್ಕಾರದಿಂದ ಬಿಡುಗಡೆಯಾಗಿರುವ ಹಣವನ್ನು ಕ್ರಮಬದ್ದವಾಗಿ ಯಾವುದೇ ಲೋಪಕ್ಕೆ ಆಸ್ಪದವಿಲ್ಲದಂತೆ ಮಿತವ್ಯಯವನ್ನು ಅನುಸರಿಸಿ ನಿಖರವಾದ ಮತ್ತು ನೈಜವಾದ ಬೆಲೆಯನ್ನು ನಿಗಧಿಪಡಿಸಲಾಗುವುದು. ಈ ವ್ಯವಹಾರದಲ್ಲಿ ಯಾವುದೇ ರೀತಿಯ ಕಮಿಷನ್ ಅಥವಾ ಆಮಿಷಗಳನ್ನು ಮತ್ತು ಶಿಫಾರಸ್ಸನ್ನು ಟೆಂಡರ್ ಕರೆದಿರುವ ಅಧಿಕಾರಿಗಳಿಗೆ ಟೆಂಡರ್ ಸಲ್ಲಿಸುವವರು ಪ್ರಸ್ತಾಪಿಸಿದಲ್ಲಿ ಅಂತಹ ಟೆಂಡರ್‌ನ್ನು ಪರಿಗಣಿಸುವುದಿಲ್ಲ. ಟೆಂಡರ್ ಸಲ್ಲಿಸುವವರು ತಮ್ಮ ಟೆಂಡರ್‌ನಲ್ಲಿ ನೈಜವಾಗಿ ದರವನ್ನು ನಿಗಧಿಪಡಿಸಬೇಕು ಹಾಗೇ ನಿಗಧಿಪಡಿಸಿದ ದರದ ಮೇಲೆ ಸಾರ್ವಜನಿಕ ಹಣವ ಉಳಿತಾಯ ಮಾಡುವ ಹಿನ್ನೆಲೆಯಲ್ಲಿ ಹೆಚ್ಚಿನ ಮಟ್ಟದಲ್ಲಿ ರಿಯಾಯಿತಿಯನ್ನು ನೀಡಲು ಸಿದ್ದವಿರಬೇಕು.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 441

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ಕ್ರ: ಎ4ಎಂಎಫ್‌ಪಿ.ಸಿಆರ್ 01/08–09, ದಿನಾಂಕ: 12ನೇ ಆಗಸ್ಟ್ 2008**

**ಕಿರು ಅರಣ್ಯ ಉತ್ಪನ್ನಗಳ ಮರು ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿ:01.07.2008 ರಿಂದ 30.06.2010ರವರೆಗೆ ಎರಡು ವರ್ಷಗಳ ಅವಧಿಗೆ ಸಾಗರ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣಕಾಡುಗಳು, ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು, ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆಯ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ, ಸಣ್ಣ ಕಾಡುಗಳು, ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ (ಗ್ರಾಮ ಅರಣ್ಯ ಸಮಿತಿಗೆ ಸಂಬಂಧಿಸಿದ ಕ್ಷೇತ್ರ ಹಾಗೂ ಸಮುದಾಯ ಕ್ಷೇತ್ರಗಳನ್ನು ಹೊರತುಪಡಿಸಿ) ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ಅಥವಾ ಅವರಿಂದ ನಿಯೋಜಿತರಾದ ಮರು ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

**ತಪಶೀಲು**

| ಕ್ರ. ಸಂ. | ಯುನಿಟ್ | ವಲಯ ಹೆಸರು | ಗುತ್ತಿಗೆಯ ಬಾಬ್ತಿನ ವಿವರ | ಗುತ್ತಿಗೆಯ ಅವಧಿ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜು ಮಾಡುವ ದಿನಾಂಕ ಮತ್ತು ವೇಳೆ | ಮುಂಗಡ ಠೇವಣಿ (ರೂ) |
|---|---|---|---|---|---|---|---|
| | | | | 1.7.2008 ರಿಂದ 30.6.2010ರವರೆಗೆ ಅಥವಾ ಕರಾರು ಆದ ದಿನಾಂಕದಿಂದ 30.6.2010ರವರೆಗೆ | 15.9.08 ರಂದು ಮಧ್ಯಾಹ್ನ 3.00 ಗಂಟೆಯವರೆಗೆ | 15.09.08ರ ಮಧ್ಯಾಹ್ನ 3.30ರ ನಂತರ | |
| 1. | 1 | ಸಾಗರ | ಮುರುಗನಹುಳಿ ಉಪ್ಪಾಗೆ ಹುಳಿ | --do-- | --do-- | --do-- | 2000–00 |
| 2. | 2 | ಸಾಗರ | ಕಿರು ಅರಣ್ಯ ಉತ್ಪನ್ನ | --do-- | --do-- | --do-- | 2000–00 |
| 3. | 7 | ಕಾರ್ಗಲ್ | ಮುರುಗನಹುಳಿ ಉಪ್ಪಾಗೆ ಹುಳಿ | --do-- | --do-- | --do-- | 2000–00 |
| 4. | 8 | ಕಾರ್ಗಲ್ | ಕಿರುಕಾಡು ಉತ್ಪನ್ನ | --do-- | --do-- | --do-- | 2000–00 |
| 5. | 10 | ಕಾರ್ಗಲ್ | ಜೇನುತುಪ್ಪ ಮತ್ತು ಮೇಣ | --do-- | --do-- | --do-- | 2000–00 |
| 6. | 12 | ಹೊಸನಗರ | ಕಿರುಕಾಡು ಉತ್ಪನ್ನ | --do-- | --do-- | --do-- | 2000–00 |
| 7. | 15 | ನಗರ | ಕಿರುಕಾಡು ಉತ್ಪನ್ನ | --do-- | --do-- | --do-- | 2000–00 |
| 8. | 22 | ಆನವಟ್ಟಿ | ಕಿರುಕಾಡು ಉತ್ಪನ್ನ | --do-- | --do-- | --do-- | 2000–00 |

**ಷರತ್ತುಗಳು:**

1. ಮೇಲ್ಕಂಡ ಕಿರುಕಾಡು ಉತ್ಪನ್ನ ಸಂಗ್ರಹಿಸುವ ಯುನಿಟ್‌ಗಳಿಂದ ಗ್ರಾಮ ಅರಣ್ಯ ಸಮಿತಿಗೆ ಸಂಬಂಧಿಸಿದ ಕ್ಷೇತ್ರ ಹಾಗೂ ಸಮುದಾಯ ಕ್ಷೇತ್ರಗಳನ್ನು ಹೊರತುಪಡಿಸಲಾಗಿದೆ.
2. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ಪತ್ರದ ಸಂಖ್ಯೆ ಎ7.ಎಂಎಫ್‌ಪಿ. ಶಿವಮೊಗ್ಗ.ಸಿಆರ್8/03–4/07–08 ದಿ:20.11.2007ರಲ್ಲಿ ನೀಡಿರುವ ನಿರ್ದೇಶನದಂತೆ ಕಿರುಕಾಡು ಉತ್ಪನ್ನ ಯುನಿಟ್‌ಗಳಲ್ಲಿ ಸಂಗ್ರಹಣೆ ಮಾಡಬಹುದಾದ ಕಿರು ಅರಣ್ಯ ಉತ್ಪನ್ನಗಳೆಂದು ಸಂಗ್ರಹಿಸಲಾದ ನೆಲ್ಲಿ, ಅಂಟುವಾಳ, ರಾಮಪತ್ರೆ, ಮುರುಗನಹುಳಿ–ಉಪ್ಪಾಗೆಹುಳಿ, ವಾಯುವಳಂಗ ಇತ್ಯಾದಿ ಇವುಗಳನ್ನು ಸೇರ್ಪಡಿಸಲಾಗಿದೆ. ಯಶಸ್ವಿ ಬಿಡ್ದುದಾರರು ಸದರಿ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಅವಕಾಶವಿರುವುದೆಂದು ತಿಳಿಯುವುದು.
3. ಸಾಗರ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೊಂದಾಯಿಸಿದವರು ಮಾತ್ರ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇದೆ.

4. ಟೆಂಡರ್ ಫಾರಂನ ಬೆಲೆ ರೂ 12–00 ಮತ್ತು ತೆರಿಗೆಗಳನ್ನು ಪಾವತಿಸಿ ಫಾರಂಗಳನ್ನು ಟೆಂಡರ್ ದಿನದಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ 1–00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುತ್ತದೆ.
5. ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ ಅರ್ಧಭಾಗದ ಗುತ್ತಿಗೆ ಹಣವನ್ನು ಗುತ್ತಿಗೆ ಕರಾರು ಮಾಡುವಾಗ ಸಂದಾಯ ಮಾಡಬೇಕು.
6. ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗಧಿಪಡಿಸಿದ ಇ.ಎಂ.ಡಿ.ಯನ್ನು ಡಿ.ಡಿ. ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ ಮತ್ತು ಸೇಲ್ಸ್ ಟ್ಯಾಕ್ಸ್ ಇನ್ಕಂಟ್ಯಾಕ್ಸ್ ಮತ್ತು ಸಾಲ್ವೆನ್ಸಿ ಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.
7. ತಪ್ಪಿತಸ್ಥ ಗುತ್ತಿಗೆದಾರರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.
8. ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರುಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.
9. ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಗುತ್ತಿಗೆ ಹಣ ಮತ್ತು ಪೂರ್ಣ ತೆರಿಗೆಗಳನ್ನು ಪಾವ್ತಿಸತಕ್ಕದ್ದು. ಬಾಕಿ ಉಳಿದ ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15(ಹದಿನೈದು) ದಿನದೊಳಗಾಗಿ ಪಾವ್ತಿಸತಕ್ಕದ್ದು. ತಪ್ಪಿದ್ದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು.
10. ಹರಾಜಿನಲ್ಲಿ ಟೆಂಡರ್‌ದಾರರ: ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ: ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.
11. ಅನಿವಾರ್ಯ ಕಾರಣಗಳಿಂದಾಗಿ ಹರಾಜನ್ನು ಮುಂದೂಡುವ: ರದ್ದುಪಡಿಸುವ: ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.
12. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 442

**KARNATAKA PUBLIC SERVICE COMMISSION, 'UDYOGA SOUDHA' BANGALORE - 1**

**NOTIFICATION**

**No. R(2)3611/2008-09/PSC, Dated: 12th August 2008**

In pursuance of this Office Notification No. PSC1 RTB-3/2007 dated:02/11/07, the Provisional Select List of Candidates for 5 posts of LABORATORY TECHNICIAN in the Department of DRUGS CONTROL, prepared on the basis of procedure prescribed in G.O. No. SWL 247 SAD 90, Dated 12.02.1993 was published vide Notification number R(2)1619/2008-09 dated 11/07/2008, inviting objections if any from candidates within 15 days of its publication. No objections have been received, and the final selection list is prepared on the basis of Rule 8(1) of KCS (Direct Recruitment by Competitive Examination & Selection (General) Rules 2006, is here by published for information of the candidates.

Appointing Authority : **DRUGS CONTROLLER**

Name of the Department : **DRUGS CONTROL DEPARTMENT**

| SL. NO. | NAME OF THE CANDIDATE | INT.NO. | D_O_B | RESVN. | QUALN. | MARKS |
|---|---|---|---|---|---|---|
| 1 | THYAGARAJA B J<br>C/O HS NANJAPPA DNO 225 IV STAGE<br>VI MAIN 12TH CROSS TK LAYOUT<br>MYSORE | 17 | 20.06.85 | GM/3A | D PHARMA<br>PUC (SCIENCE) | 73.59 |
| 2 | PUTTASWAMY S K<br>S/O KEMPALAKKAIAH SATHANUR<br>PINJARI STREET MANDYA TQ AND DT<br>571401 | 12 | 06.03.81 | GM/2A/RL | D PHARMA<br>PUC (SCIENCE) | 72.00 |

| SL. NO. | NAME OF THE CANDIDATE | INT.NO. | D_O_B | RESVN. | QUALN. | MARKS |
|---|---|---|---|---|---|---|
| 3 | PARAMESWARA H R<br>S/O REVANNA KS<br>HARIYABEE PO HIRIYUR TQ<br>CHITRADURGA 577501 | 9 | 01.03.84 | 2A | D PHARMA<br>PUC (SCIENCE) | 69.89 |
| 4 | NIRMALA V<br>NO 112 I MAIN RAMARISHNA BLOCK<br>THYAGARAJANAGAR BANGALORE<br>560028 | 19 | 11.04.81 | SC/W | D PHARMA<br>PUC (SCIENCE) | 66.11 |
| 5 | NARAYAN<br>RAMATEERTH HALCHAIRA<br>CHINCHOLI GULBARGA DT 585324 | 7 | 01.08.81 | C1 | D.PHARMA<br>PUC (SCIENCE) | 63.96 |

**NOTE:** The selection of all Candidates in this list is subject to the final decision of the Hon'ble Supreme Court of India in W A (Civil)232/99 relating to women reservation.

**V.B. PATIL**
Secretary
Karnataka Public Service Commission.

**KARNATAKA PUBLIC SERVICE COMMISSION, 'UDYOGA SOUDHA' BANGALORE - 1**

**NOTIFICATION**

**No. R(2)3612/2008-09/PSC, Dated: 12th August 2008**

In pursuance of this Office Notification No. PSC1 RTB-3/2007 dated:02/11/07, the Provisional Select List of Candidates for 1 posts of SR. LIBRARIAN and 1 post of LIBRARIAN in the Department of DDMINISTRATIVE TRAINING INSTITUTE MYSORE, prepared on the basis of procedure prescribed in G.O. No. SWL 247 SAD 90, Dated 12.02.1993 was published vide Notification number R(2)1620/2008-09 dated 15/07/2008, inviting objections if any, from candidates within 15 days of its publication. No objections have been received, and the final selection list is prepared on the basis of Rule 8(1) of KCS (Direct Recruitment by Competitive Examination & Selection (General)) Rules 2006, is here by published for information of the candidates.

Appointing Authority : **DIRECTOR GENERAL ADMINISTRATIVE TRAINING INSTITUTE, MYSORE**

Name of the Post : **SENIOR LIBRARIAN**

| SL. NO. | NAME OF THE CANDIDATE | INT.NO. | D_O_B | RESVN. | QUALN. | MARKS |
|---|---|---|---|---|---|---|
| 1 | NINGARAJA E C<br>#KL 417/A NANDANA NILAYA<br>OPP SOUTH GATE APMC MARKET<br>VV NAGARAKALLAHALLY MANDYA 571401 | 2 | 01.06.73 | GM/3A | M.LISC | 80.50 |

**Name of the Post : LIBRARIAN**

| SL. NO. | NAME OF THE CANDIDATE | INT.NO. | D_O_B | RESVN. | QUALN. | MARKS |
|---|---|---|---|---|---|---|
| 1 | VARADARAJU<br>SHERISTEDAR<br>DIST & SESSION COURT MANGALORE DK<br>575003 | 4 | 20.07.72 | GM/3A | M.LISC | 75.90 |

**V.B. PATIL**
Secretary
Karnataka Public Service Commission.

P.R. 443

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನದ ಪಕ್ಕದ ಕಟ್ಟಡ, 18ನೇ ಅಡ್ಡರಸ್ತೆ. ಮಲ್ಲೇಶ್ವರಂ, ಬೆಂಗಳೂರು

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2/ಉಅಸಂ(ಬೆಂಗ್ರಾ)/ಬಿಯುಡಿ/ವಿವ–24/06–07, ದಿನಾಂಕ: 20ನೇ ಆಗಸ್ಟ್ 2008**

**ವಿಷಯ:–** ದೇವನಹಳ್ಳಿ ತಾಲ್ಲೂಕಿನ ನೆಲ್ಲೂರು ಗ್ರಾಮದ ಅಮರಾಯಿ ಹುಣಸೆ ತೋಪು ಜೀವ ವೈವಿಧ್ಯ ಪಾರಂಪರಿಕ ತಾಣವನ್ನು ಅಭಿವೃದ್ಧಿ ಪಡಿಸುವ ಕುರಿತು.

**ಉಲ್ಲೇಖ:–** ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ಜೀವ ವೈವಿಧ್ಯ ಮಂಡಳಿ ವನನಿಕಾಸ ಬೆಂಗಳೂರು ರವರ ಆದೇಶ ಸಂಖ್ಯೆ: ಕೆಬಿಬಿ/ಇತರೆ/19/ಹೆಚ್‌ಎಸ್/06–07/312 ದಿನಾಂಕ 05–08–2008

2008–09ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ವಿಭಾಗದ ದೇವನಹಳ್ಳಿ ತಾಲ್ಲೂಕಿನ ನೆಲ್ಲೂರು ಗ್ರಾಮದ ಅಮರಾಯಿ ಹುಣಸೆ ತೋಪು ಜೀವ ವೈವಿಧ್ಯ ಪಾರಂಪರಿಕ ತಾಣವನ್ನು ಅಭಿವೃದ್ಧಿ ಪಡಿಸುವ ವಿವಿಧ ಕಾಮಗಾರಿಗಳನ್ನು ಕೈಗೊಳ್ಳಲು ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದಲ್ಲಿ ನೊಂದಾಯಿತರಾಗಿರುವ ಅರಣ್ಯ ಗುತ್ತಿಗೆದಾರರಿಂದ ಟೆಂಡರನ್ನು ದಿನಾಂಕ 20–09–2008 ರಂದು ಮತ್ತು 24–09–2008 ರಂದು ಟೆಂಡರನ್ನು ಕರೆಯಲಾಗಿದೆ. ಟೆಂಡರನ್ನು ದಿನಾಂಕ 20–09–2008 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕ 20–09–2008 ರಂದು ನಡೆಯುವ ಟೆಂಡರನ್ನಲ್ಲಿ ಅರಣ್ಯ ಗುತ್ತಿಗೆದಾರರು ಭಾಗವಹಿಸದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು ದಿನಾಂಕ 24–09–2008 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ 20–09–2008 ರಂದು ಮತ್ತು 24–09–2008 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1 ಗಂಟೆಯವರೆಗೆ ಈ ಕಛೇರಿಯಿಂದ ಪಡೆಯಬಹುದಾಗಿದೆ. ವಿವಿಧ ಕಾಮಗಾರಿಗಳ ವಿವರ ಈ ಕೆಳಗೆ ನೀಡಲಾಗಿರುವ ಷೆಡ್ಯೂಲ್‌ನಲ್ಲಿರುವಂತಿರುತ್ತವೆ.

### ಷಡ್ಯೂಲ್

ದೇವನಹಳ್ಳಿ ತಾಲ್ಲೂಕಿನ ನೆಲ್ಲೂರು ಗ್ರಾಮದ ಅಮರಾಯಿ ಹುಣಸೆ ತೋಪು ಜೀವ ವೈವಿಧ್ಯ ಪಾರಂಪರಿಕ ತಾಣವನ್ನು ಅಭಿವೃದ್ಧಿ ಪಡಿಸುವ ಯೋಜನೆ:–

| ಕ್ರ. ಸಂ. | ಸ್ಥಳ | ಕಾಮಗಾರಿ ವಿವರ | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|
| 1 | ದೇವನಹಳ್ಳಿ ವಲಯ | ನೆಲ್ಲೂರು ಗ್ರಾಮದ ಅಮರಾಯಿ ಹುಣಸೆ ತೋಪು ಜೀವ ವೈವಿಧ್ಯ ಪಾರಂಪರಿಕ ತಾಣದ ಅಭಿವೃದ್ಧಿಗಾಗಿ ಈ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವುದು.<br>1) ಬಾರ್ಬಡ್ ವೈರ್ ಫೆನ್ಸಿಂಗ್<br>2) ನೆಡುತೋಪಿನಲ್ಲಿ ಬೆಳೆದಿರುವ ಕಳೆಯನ್ನು ತೆಗೆಯುವುದು<br>3) ಪ್ರಚಾರ ನಾಮ ಫಲಕಗಳನ್ನು ಅಳವಡಿಸುವುದು<br>4) ಪ್ರತಿಯೊಂದು ಮರದ ಇತಿಹಾಸವನ್ನು ಒಳಗೊಂಡ ನಾಮ ಫಲಕ ಅಳವಡಿಸುವುದು. | 3,55,233.00 | 8,880.00 | 30–11–2008 |

### ನಿಬಂಧನೆಗಳು

1. ಟೆಂಡರ್ ಫಾರಂಗಳನ್ನು ಫಾರಂ ಒಂದಕ್ಕೆ ರೂ. 200.00 ಗಳು ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ: 20.09.2008 ಕಚೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಒಂದು ವೇಳೆ 20.09.2008 ರಂದು ಟೆಂಡರ್ ನಡೆಯದೇ ಇದ್ದಲ್ಲಿ ದಿನಾಂಕ 24–09–2008 ರಂದು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2008–09ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದ್ದಲ್ಲಿ ಅಂತವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 20–09–2008ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ

ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 24–09–2008 ರಂದು ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

4. ಈ ಸದರಿ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆಯೇ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸದಿದ್ದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು. ಮತ್ತು ಉಂಟಾದ ನಷ್ಟವನ್ನು ಅವರಿಂದ ವಸೂಲಿ ಮಾಡಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಿಕೊಳ್ಳಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರ ಯಾವುದೇ ಕಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆ/ಲೋಕೋಪಯೋಗಿ ಇಲಾಖೆ/ಸಣ್ಣ ನೀರಾವರಿ ಇಲಾಖೆ/ಜಲಾನಯನ ಅಭಿವೃದ್ಧಿ ಇಲಾಖೆ ಅಥವಾ ಇತರೆ ಸಂಬಂಧಪಟ್ಟ ಇಲಾಖೆಯ ಕಾಮಗಾರಿಗೆ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ

ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರಬೇಕಾಗಿರುತ್ತದೆ.

19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿರವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
20. ಟೆಂಡರ್‌ನ್ನು ಕಂಪನಿಯ ವತಿಯಿಂದ/ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ

    ಅ) ಕಂಪನಿಯ/ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.

    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.
21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಚಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೋಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.
22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ. 5ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕದಂದು 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.
26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
27. ಟೆಂಡರ್ ಫಾರಂ ನೀಡುವ ದಿನದಂದು ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ದರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ<br>
ಬೆಂಗಳೂರು ಗ್ರಾಮಾಂತರ ವಿಭಾಗ<br>
ಬೆಂಗಳೂರು.

ಪಿ.ಆರ್. 447

**ಕರ್ನಾಟಕ ಲೋಕ ಸೇವಾ ಆಯೋಗ**
**ಉದ್ಯೋಗ ಸೌಧ, ಬೆಂಗಳೂರು–560 001.**
**ಅಧಿಸೂಚನೆ**
**ಸಂಖ್ಯೆ: ಇ(1)203/2008–09/ಪಿಎಸ್‌ಸಿ, ದಿನಾಂಕ: 27ನೇ ಆಗಸ್ಟ್ 2008**

1. ಕರ್ನಾಟಕ ರಾಜ್ಯ ಅರಣ್ಯ ಸೇವೆಗಳು (ನೇಮಕಾತಿ) ನಿಯಮಗಳು 2003ರ ಮೇರೆಗೆ 2007–08 ಹಾಗೂ 2008–09ನೇ ಸಾಲಿಗೆ 10 ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗಳ ಆಯ್ಕೆ ಸಲುವಾಗಿ ಅಭ್ಯರ್ಥಿಗಳನ್ನು 2 ವರ್ಷಗಳ ಡಿಪ್ಲೋಮಾ ಕೋರ್ಸ್ ಇನ್ ಫಾರೆಸ್ಟ್ರಿ ತರಬೇತಿಗಾಗಿ ಆಯ್ಕೆ ಮಾಡಲು ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗಾಗಿ ಅರ್ಹ ಅಭ್ಯರ್ಥಿಗಳಿಂದ **ಆಯೋಗವು ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ** ಅರ್ಜಿಗಳನ್ನು ಆಹ್ವಾನಿಸಲಾಗಿದೆ.
2. **ಸದರಿ ಹುದ್ದೆಗಳಿಗೆ ಅರ್ಜಿಗಳನ್ನು ಆಯೋಗವು ನಿಗದಿಪಡಿಸಿರುವ ನಮೂನೆಯಲ್ಲಿಯೇ ಸಲ್ಲಿಸಬೇಕು**. ಇತರೆ ಯಾವುದೇ ನಮೂನೆಗಳಲ್ಲಿಯಾಗಲಿ ಅಥವಾ ಬೆರಳಚ್ಚು/ಫೋಟೋ ಪ್ರತಿ ಮಾಡಿರುವ, ಕೈಬರಹದಿಂದ ಸಲ್ಲಿಸಲ್ಪಡುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಅರ್ಜಿಗಳನ್ನು ರೂ.50/–ಗಳ ಐ.ಪಿ.ಓ/ಡಿ.ಡಿ ಯನ್ನು **"ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು"**, ಇವರಿಗೆ ಸಂದಾಯವಾಗುವಂತೆ ಪಾವತಿಸಿ ಆಯೋಗದ ಕೇಂದ್ರ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು ಹಾಗೂ ಮೈಸೂರು, ಬೆಳಗಾವಿ ಮತ್ತು ಗುಲ್ಬರ್ಗಾಗಳಲ್ಲಿನ ಆಯೋಗದ ಪ್ರಾಂತೀಯ ಕಛೇರಿಗಳಲ್ಲಿ ದಿನಾಂಕ: 06–09–2008ರಿಂದ ಪಡೆಯಬಹುದು.
4. **ಪ್ರಾಂತೀಯ ಕಛೇರಿಗಳ ವಿಳಾಸ:**

| **1. ಸಹಾಯಕ ಕಾರ್ಯದರ್ಶಿ** | **2.ಸಹಾಯಕ ಕಾರ್ಯದರ್ಶಿ** | **3.ಸಹಾಯಕ ಕಾರ್ಯದರ್ಶಿ,** |
|---|---|---|
| ಕರ್ನಾಟಕ ಲೋಕಸೇವಾ ಆಯೋಗ | ಕರ್ನಾಟಕ ಲೋಕಸೇವಾ ಆಯೋಗ | ಕರ್ನಾಟಕ ಲೋಕಸೇವಾ ಆಯೋಗ |
| ಪ್ರಾಂತೀಯ ಕಛೇರಿ | ಪ್ರಾಂತೀಯ ಕಛೇರಿ | ಪ್ರಾಂತೀಯ ಕಛೇರಿ, |
| ಸಂಖ್ಯೆ:899, 3ನೇ ಮೈನ್, 8ನೇ ಅಡ್ಡರಸ್ತೆ, | ಜಿಲ್ಲಾ ಪಂಚಾಯತ್, ಹಳೆಯ ಕಟ್ಟಡ | ಸಂಖ್ಯೆ: 28, 3ನೇ ಮಹಡಿ |
| ಸರಸ್ವತಿಪುರಂ, | ಜಿಲ್ಲಾಧಿಕಾರಿಗಳ ಕಛೇರಿ ಆವರಣ | ವಿಕಾಸ ಭವನ, ಮಿನಿ ವಿಧಾನಸೌಧ |
| ಮೈಸೂರು–570 009 | ಬೆಳಗಾವಿ–590 001 | ಗುಲ್ಬರ್ಗಾ–585 102 |

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 06–10–2008ಆಗಿರುತ್ತದೆ.**

**ಸೂಚನೆ:** **ಭರ್ತಿ ಮಾಡಿದ ಅರ್ಜಿಗಳನ್ನು ಮೇಲೆ ತಿಳಿಸಿರುವ ಕರ್ನಾಟಕ ಲೋಕಸೇವಾ ಆಯೋಗದ ಕೇಂದ್ರ ಕಛೇರಿ, ಬೆಂಗಳೂರು ಅಥವಾ ಆಯೋಗದ ಪ್ರಾಂತೀಯ ಕಛೇರಿಗಳಲ್ಲಿ ಖುದ್ದಾಗಿ ಸಲ್ಲಿಸಬೇಕು. ಅಂಚೆ ಮೂಲಕ ಅರ್ಜಿ ಸಲ್ಲಿಸಬಯಸುವ ಅಭ್ಯರ್ಥಿಗಳು ಆಯೋಗದ ಕೇಂದ್ರ ಕಛೇರಿ, ಉದ್ಯೋಗ ಸೌಧ, ಬೆಂಗಳೂರು – 560001, ಇಲ್ಲಿಗೆ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ನಿಗದಿತ ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

5. **ಪರೀಕ್ಷಾ ಶುಲ್ಕ/ಶುಲ್ಕ ಪಾವತಿ ಮಾಡುವ ರೀತಿ**

5.1 ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ–1 ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ರೂ. 100/–
ಸಾಮಾನ್ಯ ಅರ್ಹತೆ, ಪ್ರವರ್ಗ 2ಎ, 2ಬಿ, 3ಎ, 3ಬಿ ನ ಅಭ್ಯರ್ಥಿಗಳಿಗೆ ರೂ. 300/–

5.2 ಭರ್ತಿ ಮಾಡಿದ ಅರ್ಜಿಗಳನ್ನು ನಿಗದಿತ ಪರೀಕ್ಷಾ ಶುಲ್ಕವನ್ನು "ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು" ಇವರಿಗೆ ಸಂದಾಯವಾಗುವಂತೆ ಐ.ಪಿ.ಓ/ಡಿ.ಡಿ ಯನ್ನು ಪಡೆದು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಸಲ್ಲಿಸತಕ್ಕದ್ದು.

5.3 ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

5.4 ಯಾವುದೇ ಅಭ್ಯರ್ಥಿಗಳು ಮೇಲೆ ತಿಳಿಸಿರುವ ಶುಲ್ಕವನ್ನು ಪಾವತಿಸದಿದ್ದಲ್ಲಿ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

6. **ಹುದ್ದೆಗಳ ವರ್ಗೀಕರಣ:**

ಹುದ್ದೆಗಳ ವರ್ಗೀಕರಣವನ್ನು ಈ ಕೆಳಕಂಡಂತೆ ತೋರಿಸಲಾಗಿದೆ. ಇದರಲ್ಲಿ ತೋರಿಸಲಾಗಿರುವ ವರ್ಗೀಕರಣ ಮತ್ತು ರಿಕ್ತ ಸ್ಥಾನಗಳು ಬದಲಾವಣೆಗೆ ಒಳಪಟ್ಟಿರುತ್ತವೆ.

ಐದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಹುದ್ದೆಗಳಿಗೆ ಸಂಬಂಧಿಸಿದಂತೆ ಫಾರೆಸ್ಟ್ರಿ ವಿಷಯದಲ್ಲಿ ಪದವಿ ಹೊಂದಿದವರಿಂದ ತುಂಬಲು ಮೀಸಲಾದ ಹುದ್ದೆಗಳ ವರ್ಗೀಕರಣ.

| ವರ್ಗೀಕರಣ | ಇತರೆ | ಮಹಿಳಾ | ಗ್ರಾಮೀಣ |
|---|---|---|---|
| ಪ.ಜಾ. | – | 01 | – |
| ಪ್ರ–2ಎ | 01 | – | – |
| ಸಾ.ಅ. | 01 | 01 | 01 |

ಐದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಹುದ್ದೆಗಳಿಗೆ ಸಂಬಂಧಿಸಿದಂತೆ ಫಾರೆಸ್ಟ್ರಿ ವಿಷಯವಲ್ಲದ ವಿಜ್ಞಾನ ವಿಷಯದಲ್ಲಿ ಪದವಿ ಹೊಂದಿದವರಿಂದ ತುಂಬಲು ಮೀಸಲಾದ ಹುದ್ದೆಗಳ ವರ್ಗೀಕರಣ.

| ವರ್ಗೀಕರಣ | ಇತರೆ | ಮಹಿಳಾ | ಗ್ರಾಮೀಣ |
|---|---|---|---|
| ಪ.ಜಾ. | – | 01 | – |
| ಪ್ರ–2ಎ | 01 | – | – |
| ಸಾ.ಅ. | 01 | 01 | 01 |

7. (ಅ) **ವೇತನ ಶ್ರೇಣಿ: ರೂ. 14,050 – 25,050**

7. (ಆ) **<u>ಹುದ್ದೆಗಳ ಕಾಲಾವಧಿ</u> – ಹುದ್ದೆಯು ಖಾಯಂ ಅವಧಿಯದ್ದಾಗಿದ್ದು, ಆಯ್ಕೆಯಾದ ಅಭ್ಯರ್ಥಿಗಳು ಎರಡು ವರ್ಷಗಳ ಡಿಪ್ಲೊಮಾ ಇನ್ ಫಾರೆಸ್ಟ್ರಿ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿದ ನಂತರ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರನ್ವಯ ಎರಡು ವರ್ಷಗಳ ಪ್ರೊಬೆಷನರಿ ಅವಧಿಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ ಹಾಗೂ ಉಳಿದಂತೆ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಂತೆ ಇರುತ್ತದೆ.**

8. **<u>ಶೈಕ್ಷಣಿಕ ವಿದ್ಯಾರ್ಹತೆ ಮತ್ತು ದೇಹ ದಾರ್ಢ್ಯತೆ:</u>**

ಅ) ಫಾರೆಸ್ಟ್ರಿ ಪದವೀಧರರಿಗಾಗಿ ಮೀಸಲಿರಿಸಿದ ಹುದ್ದೆಗಳಿಗೆ ಅಭ್ಯರ್ಥಿಗಳು ಫಾರೆಸ್ಟ್ರಿ ವಿಷಯದಲ್ಲಿ ವಿಜ್ಞಾನ ಪದವಿ ಪರೀಕ್ಷೆಯಲ್ಲಿ ಶೇ. 50 ಕ್ಕಿಂತ ಕಡಿಮೆ ಇಲ್ಲದ ಅಂಕ ಪಡೆದು ತೇರ್ಗಡೆ ಆಗಿರಬೇಕು ಹಾಗೂ ಫಾರೆಸ್ಟ್ರಿ ವಿಷಯವಲ್ಲದ ವಿಜ್ಞಾನ ಪದವೀಧರರಿಗೆ ಮೀಸಲಾದ ಹುದ್ದೆಗಳಿಗಾಗಿ ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಕೃಷಿ, ತೋಟಗಾರಿಕೆ ಅಥವಾ ಪಶು ವೈದ್ಯ ವಿಜ್ಞಾನ ಪದವಿ ಅಥವಾ ಗಣಿತ ಶಾಸ್ತ್ರ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯ ಶಾಸ್ತ್ರಗಳಲ್ಲಿ 2 ಮತ್ತು ಅದಕ್ಕಿಂತ ಹೆಚ್ಚು ವಿಷಯಗಳೊಡನೆ ಪಡೆದ ವಿಜ್ಞಾನ ಪದವಿ ಪರೀಕ್ಷೆಯಲ್ಲಿ ಶೇ. 50ಕ್ಕಿಂತ ಕಡಿಮೆ ಇಲ್ಲದ ಅಂಕ ಪಡೆದು ತೇರ್ಗಡೆ ಆಗಿರಬೇಕು ಅಥವಾ ಇಂಜಿನಿಯರಿಂಗ್‌ನ ಯಾವುದೇ ವಿಭಾಗದ ಪದವಿ ಪರೀಕ್ಷೆಯಲ್ಲಿ ಶೇ.50ಕ್ಕಿಂತ ಕಡಿಮೆ ಇಲ್ಲದ ಅಂಕ ಪಡೆದು ತೇರ್ಗಡೆಯಾಗಿರಬೇಕು. ಅಥವಾ ಸರ್ಕಾರವು ಅಂತಹ ಪರೀಕ್ಷೆಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಹೊಂದಿರಬೇಕು.

ಆ) ಹುದ್ದೆಗಳಿಗೆ ಜಾರಿಗೊಳಿಸಲಾದ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ, ನಿರ್ದಿಷ್ಟವಾದ ದೈಹಿಕ ದೇಹ ದಾರ್ಢ್ಯತೆಯನ್ನು ನಿಗದಿಪಡಿಸಿದ್ದು, ಅಂತಹ ದೇಹ ದಾರ್ಢ್ಯತೆಯನ್ನು ಹೊಂದಿದ್ದಲ್ಲಿ ಮಾತ್ರ ಈ ಹುದ್ದೆಗಳಿಗೆ ನೇಮಕಗೊಳ್ಳಲು ಅಭ್ಯರ್ಥಿಯು ಅರ್ಹತೆ ಪಡೆಯುತ್ತಾನೆ/ತ್ತಾಳೆ. ಅದನ್ನು ಹೊಂದಿರದ ಯಾವುದೇ ಅಭ್ಯರ್ಥಿ ಈ ಹುದ್ದೆಗೆ ಅರ್ಹರಾಗುವುದಿಲ್ಲ.

ಶಾರೀರಿಕ ದಾರ್ಢ್ಯತೆಗೆ ಸಂಬಂಧಿಸಿದ ಷರತ್ತುಗಳು

| ಎತ್ತರ | | ಎದೆಯ ಸುತ್ತಳತೆ (ನಿಶ್ವಾಸ ಸ್ಥಿತಿಯಲ್ಲಿ) | | ಉಚ್ವಾಸ ಸ್ಥಿತಿಯಲ್ಲಿ ವಿಸ್ತರಣೆ |
|---|---|---|---|---|
| ಪುರುಷ | ಮಹಿಳೆ | ಪುರುಷ | ಮಹಿಳೆ | |
| 163 ಸೆ.ಮೀ | 150 ಸೆ.ಮೀ | 79 ಸೆ.ಮೀ | 74 ಸೆ.ಮೀ | 5 ಸೆ.ಮೀ |

9. **<u>ದೃಷ್ಟಿ ಸಾಮರ್ಥ್ಯ:</u>**

| ದೂರದ ದೃಷ್ಟಿ | | ಹತ್ತಿರದ ದೃಷ್ಟಿ | |
|---|---|---|---|
| ದೋಷ ರಹಿತ ದೃಷ್ಟಿ | ದೋಷಪೂರಿತ ದೃಷ್ಟಿ | ದೋಷ ರಹಿತ ದೃಷ್ಟಿ | ದೋಷಪೂರಿತ ದೃಷ್ಟಿ |
| 6/6 | 6/9 | 0/6 | 0/8 |

ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ (Colour Blindness), ಮೆಳ್ಳೆಗಣ್ಣು (Squint Eye) ಅಥವಾ ಯಾವುದೇ ಕಣ್ಣಿನ/ರೆಪ್ಪೆಯ ವಿಕೃತ ಸ್ಥಿತಿಯನ್ನು (morbid conditions) ಅನರ್ಹತೆ ಎಂದು ಪರಿಗಣಿಸಲಾಗುವುದು.

ಶ್ರವಣ ಪರೀಕ್ಷೆಯಲ್ಲಿನ ರಿನ್ನರ್ಸ್ (Rinner's), ವೆಬ್ಬರ್ಸ್(Webber's) ಹಾಗೂ ವರ್ಟಿಗೊ(Vertigo) ಪರೀಕ್ಷೆಗಳಲ್ಲಿ ನ್ಯೂನ್ಯತೆ ಕಂಡು ಬಂದಲ್ಲಿ ಅನರ್ಹಗೊಳಿಸಲಾಗುತ್ತದೆ. ಅಲ್ಲದೆ Knock knees, Bow legs, Flat feet, varicose veins ಇದ್ದಲ್ಲಿ ಅನರ್ಹಗೊಳಿಸಲಾಗುತ್ತದೆ.

ಪುರುಷ ಅಭ್ಯರ್ಥಿಯು 25 ಕಿ.ಮೀ ಮಹಿಳಾ ಅಭ್ಯರ್ಥಿಗಳು 14 ಕಿ.ಮೀ ನಡಿಗೆಯನ್ನು 4 ಗಂಟೆ ಅವಧಿಯಲ್ಲಿ ಪೂರೈಸುವ ಸಹಿಷ್ಣುತೆ ಹೊಂದಿರಬೇಕು.

**ಸೂಚನೆ**: ದೇಹಾರೋಗ್ಯ ಪ್ರಮಾಣ ಪತ್ರ: ಅಭ್ಯರ್ಥಿಯು ಅರ್ಜಿಯೊಂದಿಗೆ ಲಗತ್ತಿಸುವ ವೈದ್ಯಕೀಯ ಪ್ರಮಾಣ ಪತ್ರವು (Physical Standard) ಸರ್ಕಾರಿ ಸಹಾಯಕ ಶಸ್ತ್ರ ಚಿಕಿತ್ಸಕರಿಗಿಂತ (Assistant Surgeon) ಕಡಿಮೆ ಇಲ್ಲದ ಮೇಲಿನ ದರ್ಜೆಯ ವೈದ್ಯಾಧಿಕಾರಿಯವರಿಂದ ಪಡೆದಿರಬೇಕು.

10. **ಪರೀಕ್ಷಾ ವಿಧಾನ:**

ಈ ಸ್ಪರ್ಧಾತ್ಮಕ ಪರೀಕ್ಷೆಯು ಕರ್ನಾಟಕ ಅರಣ್ಯ ಇಲಾಖೆ ಸೇವೆಗಳು (ನೇಮಕಾತಿ) ನಿಯಮ 2002ರಲ್ಲಿ ತಿಳಿಸಿರುವಂತೆ ಎರಡು ಹಂತಗಳನ್ನು ಒಳಗೊಂಡಿರುತ್ತವೆ. ಹೆಚ್ಚಿನ ವಿವರಗಳಿಗೆ ನಿಯಮಾವಳಿಗಳನ್ನು ಪರಿಶೀಲಿಸಬಹುದು. ನಿಯಮಾವಳಿಗಳನ್ನು ಆಯೋಗದ ವೆಬ್‌ಸೈಟ್: http://KPSC.Kar.nic.in.ನಲ್ಲಿ ಪ್ರಕಟಿಸಲಾಗಿದೆ.

(i) ಪೂರ್ವಭಾವಿ ಪರೀಕ್ಷೆ (ಪ್ರಿಲಿಮಿನರಿ ಎಕ್ಸಾಮಿನೇಷನ್) – ಮುಖ್ಯ ಪರೀಕ್ಷೆಗೆ (ಮೈನ್ ಎಕ್ಸಾಮಿನೇಷನ್) 1:10ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ನಡೆಸುವ ಪರೀಕ್ಷೆ.

(ii) ಮುಖ್ಯ ಪರೀಕ್ಷೆ (ಮೈನ್ ಎಕ್ಸಾಮಿನೇಷನ್) (ಲಿಖಿತ ಪರೀಕ್ಷೆ ಮತ್ತು ಶಾರೀರಿಕ ದಾರ್ಢ್ಯತೆ ಪರೀಕ್ಷೆ ಹಾಗೂ ವ್ಯಕ್ತಿತ್ವ ಪರೀಕ್ಷೆ) – ಅರ್ಹತೆಯನುಸಾರ ಅಭ್ಯರ್ಥಿಗಳನ್ನು 1:5ರ ಅನುಪಾತದಲ್ಲಿ ವ್ಯಕ್ತಿತ್ವ ಪರೀಕ್ಷೆಗೆ ಆಯ್ಕೆ ಮಾಡುವ ಸಲುವಾಗಿ ನಡೆಸುವ ಪರೀಕ್ಷೆ.

(iii) ವ್ಯಕ್ತಿತ್ವ ಪರೀಕ್ಷೆ : ಆಯೋಗವು ನಿಯಮಾನುಸಾರ ನಡೆಸುವ ಲಿಖಿತ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಹುದ್ದೆಗಳ ಅಥವಾ ನೇಮಕಾತಿಗಾಗಿ ಇರುವ ಮೀಸಲಾತಿ ಅನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ 1:5ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಪರಿಗಣಿಸಲಾಗುವುದು. ಲಿಖಿತ ಪರೀಕ್ಷೆಗೆ ಗೊತ್ತುಪಡಿಸಿದ ಒಟ್ಟು ಗರಿಷ್ಠ ಅಂಕಗಳ ಶೇಕಡಾ 5 ರಷ್ಟು ಅಂಕಗಳು ಅಂದರೆ 20 ಅಂಕಗಳು

ಪೂರ್ವಭಾವಿ ಪರೀಕ್ಷೆಯು ವಸ್ತುನಿಷ್ಠ (ಬಹು ಆಯ್ಕೆ) ಮಾದರಿಯ ಸಾಮಾನ್ಯ ಜ್ಞಾನ ಹಾಗೂ ಆಪ್ಟಿಟ್ಯೂಡ್ ಟೆಸ್ಟ್ ಪತ್ರಿಕೆಗಳನ್ನು ಹೊಂದಿರುತ್ತದೆ.

| ಪತ್ರಿಕೆ 1 | ಸಾಮಾನ್ಯ ಜ್ಞಾನ | 100 ಅಂಕಗಳು | 2 ಗಂಟೆಗಳ ಅವಧಿ |
|---|---|---|---|
| ಪತ್ರಿಕೆ 2 | ಆಪ್ಟಿಟ್ಯೂಡ್ ಟೆಸ್ಟ್ | 100 ಅಂಕಗಳು | 2 ಗಂಟೆಗಳ ಅವಧಿ |

**ಮುಖ್ಯ ಪರೀಕ್ಷೆ:–**

**ಫಾರೆಸ್ಟ್ರಿ ಪದವೀಧರರಿಗೆ** ಮುಖ್ಯ ಪರೀಕ್ಷೆಯು ಕಡ್ಡಾಯ ಕನ್ನಡ, ಕಡ್ಡಾಯ ಇಂಗ್ಲೀಷ್ ಅಲ್ಲದೆ ಸಾಮಾನ್ಯ ಜ್ಞಾನ, ಆಪ್ಟಿಟ್ಯೂಡ್ ಟೆಸ್ಟ್ ಹಾಗೂ ಎರಡು ಐಚ್ಛಿಕ ವಿಷಯಗಳಾದ ಫಾರೆಸ್ಟ್ರಿ –1 ಮತ್ತು ಫಾರೆಸ್ಟ್ರಿ –2ರ ಪತ್ರಿಕೆಗಳು ಹಾಗೂ **ಫಾರೆಸ್ಟ್ರಿ ವಿಷಯವಲ್ಲದ ಪದವೀಧರರಿಗೆ** ಮುಖ್ಯ ಪರೀಕ್ಷೆಯು ಕಡ್ಡಾಯ ಕನ್ನಡ, ಕಡ್ಡಾಯ ಇಂಗ್ಲೀಷ್ ಅಲ್ಲದೆ ಸಾಮಾನ್ಯ ಜ್ಞಾನ, ಆಪ್ಟಿಟ್ಯೂಡ್ ಟೆಸ್ಟ್ ಹಾಗೂ ಎರಡು ಐಚ್ಛಿಕ ವಿಷಯಗಳು ಸೇರಿದಂತೆ 6 ಪತ್ರಿಕೆಗಳನ್ನು ಹೊಂದಿರುತ್ತದೆ. ಫಾರೆಸ್ಟ್ರಿ ವಿಷಯವಲ್ಲದ ಪದವೀಧರ ಅಭ್ಯರ್ಥಿಗಳು ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಯಾವುದಾದರೂ ಎರಡು ಐಚ್ಛಿಕ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗಿರುತ್ತದೆ. ಪ್ರಶ್ನೆ ಪತ್ರಿಕೆಯು 100 ಅಂಕಗಳದ್ದಾಗಿರುತ್ತದೆ.

ಐಚ್ಛಿಕ ವಿಷಯಗಳು:

| **1. Physics** | **5. Zoology** |
|---|---|
| **2. Chemistry** | **6. Agriculture** |
| **3. Mathematics** | **7. Civil Engineering** |
| **4. Botany** | |

**ಸೂಚನೆ**: ಕಡ್ಡಾಯ ವಿಷಯಗಳಾದ ಕನ್ನಡ, ಇಂಗ್ಲೀಷ್ ಪತ್ರಿಕೆಗಳಲ್ಲಿನ ಅಂಕಗಳು ಅರ್ಹತಾದಾಯಕ ಅಂಕಗಳಾಗಿರುತ್ತದೆ. ಈ ಪತ್ರಿಕೆಗಳಲ್ಲಿ ಅರ್ಹತೆ ಗಳಿಸಲು ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇ 30 ಅಂಕಗಳು ಮತ್ತು ಒಟ್ಟಾರೆ ಕನಿಷ್ಠ ಶೇ 35 ಅಂಕಗಳನ್ನು ನಿಗದಿಪಡಿಸಲಾಗಿದೆ. ಈ ಎರಡೂ ಪತ್ರಿಕೆಗಳಲ್ಲಿ ಗಳಿಸಿದ ಅಂಕಗಳನ್ನು ಅಭ್ಯರ್ಥಿಗಳ ಆಯ್ಕೆಯ ಅರ್ಹತೆಯನ್ನು ನಿಗದಿಪಡಿಸುವಲ್ಲಿ ಪರಿಗಣಿಸಲಾಗುವುದಿಲ್ಲ. ಎರಡು ಪತ್ರಿಕೆಗಳಲ್ಲಿ ನಿಗದಿತ ಅಂಕಗಳನ್ನು ಗಳಿಸದ ಅಭ್ಯರ್ಥಿಗಳು ಐಚ್ಛಿಕ ವಿಷಯಗಳಲ್ಲಿ ಎಷ್ಟೇ ಹೆಚ್ಚು ಅಂಕಗಳನ್ನು ಗಳಿಸಿದ್ದರೂ ವ್ಯಕ್ತಿತ್ವ

ಪರೀಕ್ಷೆಗೆ ಅರ್ಹರಾಗುವುದಿಲ್ಲ ಹಾಗೂ ಇಂತಹ ಅಭ್ಯರ್ಥಿಗಳ ಇತರೆ ವಿಷಯಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ ಅಲ್ಲದೆ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ.

ಅಭ್ಯರ್ಥಿಗಳು ಆಯ್ಕೆಮಾಡಿಕೊಂಡಿರುವ ಎಲ್ಲಾ ಪತ್ರಿಕೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು. ಯಾವುದೇ ಒಂದು ಪತ್ರಿಕೆಗೆ ಗೈರುಹಾಜರಾದರೂ ಸಹ ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ ಹಾಗೂ ಉಳಿದ ಪತ್ರಿಕೆಗಳಲ್ಲಿ ಎಷ್ಟೇ ಅಂಕಗಳನ್ನು ಗಳಿಸಿದ್ದರೂ ಸಹ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ.

**ಮುಖ್ಯ ಪರೀಕ್ಷೆಯ ಪಠ್ಯ ಕ್ರಮ (Syllabus) ವನ್ನು ಆಯೋಗದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.**

**ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.**

**ಅಭ್ಯರ್ಥಿಗಳ ಆಯ್ಕೆ ಪಟ್ಟಿ:–** ಆಯೋಗವು, ಅಭ್ಯರ್ಥಿಗಳು ಮುಖ್ಯ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯಲ್ಲಿ ಪಡೆದ ಅಂಕಗಳ ಜ್ಯೇಷ್ಠತೆ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಲಭ್ಯವಿರುವ ಹುದ್ದೆಗಳಿಗೆ ಆಯ್ಕೆ ಮಾಡಲಾಗುವುದು.

11. ಅರ್ಹತಾ ಷರತ್ತುಗಳು:–

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತನಾಗಿರಬೇಕು.

12 **ವಯೋಮಿತಿ**

ಅರ್ಜಿಗಳನ್ನು ಆಹ್ವಾನಿಸಿ ಜಾರಿ ಮಾಡಲಾದ ಅಧಿಸೂಚನಾ ದಿನಾಂಕದಂದು ಅಭ್ಯರ್ಥಿಯು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು. ಹಾಗೂ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

**ಗರಿಷ್ಠ ವಯೋಮಿತಿ:**

| | |
|---|---|
| ಸಾಮಾನ್ಯ ವರ್ಗ | 30 ವರ್ಷ |
| ಪ್ರವರ್ಗ – 2ಎ, 2ಬಿ, 3ಎ, 3ಬಿ | 33 ವರ್ಷ |
| ಪ.ಜಾ/ಪ.ಪಂ/ಪ್ರ–1 | 35 ವರ್ಷ |

ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳು.

ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

ವಿವರಣೆ:– ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

**ಜನ್ಮ ದಿನಾಂಕಕ್ಕಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ, ವರ್ಗಾವಣೆ ಪ್ರಮಾಣ ಪತ್ರ (ಟಿ..ಸಿ./ಕ್ಯುಮುಲೇಟಿವ್ ರೆಕಾರ್ಡ್)ದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಒಪ್ಪಿಕೊಳ್ಳುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.**

**13. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :–**

ಜಾತಿ ಮೀಸಲಾತಿ ಕೋರಬಯಸುವ

- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು **ನಮೂನೆ 'ಡಿ'** ನಲ್ಲಿ,
- ಪ್ರವರ್ಗ–1ರ ಅಭ್ಯರ್ಥಿಗಳು **ನಮೂನೆ 'ಇ'** ನಲ್ಲಿ ಹಾಗೂ
- ಪ್ರವರ್ಗ–2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು **ನಮೂನೆ 'ಎಫ್'** ನಲ್ಲಿ ಸಂಬಂಧಿತ ತಹಶೀಲ್ದಾರ್ ರವರಿಂದ ಅರ್ಜಿ ಸಲ್ಲಿಸುವ ದಿನಾಂಕದಂದು ಚಾಲ್ತಿಯಲ್ಲಿರುವ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

13(ಅ) **ಗ್ರಾಮೀಣ ಅಭ್ಯರ್ಥಿ:–** ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1ರಲ್ಲಿ ಮೇಲುಸ್ತರಕ್ಕೆ ಸೇರದಿರುವ ಬಗ್ಗೆ ಪ್ರಮಾಣ ಪತ್ರವನ್ನು ತಹಶೀಲ್ದಾರ್‌ರವರಿಂದ ಪಡೆದು ಸಲ್ಲಿಸತಕ್ಕದ್ದು.

**14. ಆಯೋಗದೊಡನೆ ಪತ್ರ ವ್ಯವಹಾರ**

ಆಯೋಗವು ಅಭ್ಯರ್ಥಿಕೆಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಅಭ್ಯರ್ಥಿಗೆ ಪರೀಕ್ಷೆಗಾಗಿ ಪ್ರವೇಶ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕೇಂದ್ರ ಕಛೇರಿಯನ್ನು ಖುದ್ದಾಗಿ ಸಂಪರ್ಕಿಸತಕ್ಕದ್ದು. ಪರೀಕ್ಷಾ ಪ್ರವೇಶಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಪ್ರವೇಶ ಪತ್ರ ಅಥವಾ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದು. ಪ್ರವೇಶ ಪತ್ರ ಹೊಂದಿಲ್ಲದ ಅಭ್ಯರ್ಥಿಗೆ ಪರೀಕ್ಷೆಯನ್ನು ಬರೆಯಲು ಅನುಮತಿಸುವುದಿಲ್ಲ.

**ಪರೀಕ್ಷೆಯ ಪ್ರವೇಶಕ್ಕಾಗಿ ನೀಡುವ ಪ್ರವೇಶ ಪತ್ರದಲ್ಲಿ ಕೆಲವು ಅಭ್ಯರ್ಥಿಗಳ ಹೆಸರನ್ನು ತಾಂತ್ರಿಕ ಕಾರಣದಿಂದಾಗಿ ಮೊಟಕುಗೊಳಿಸಲಾಗುವುದು ಎಂಬುದನ್ನು ಅಭ್ಯರ್ಥಿಗಳು ಗಮನಿಸತಕ್ಕದ್ದು.**

**ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.**

ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು:–

(i) ಆಯೋಗದಿಂದ ನೀಡಲಾದ ಪ್ರವೇಶ ಪತ್ರದ ನೋಂದಣಿ ಸಂಖ್ಯೆ
(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ (ದೂರವಾಣಿ ಸಂಖ್ಯೆಯೊಂದಿಗೆ)
(iv) ಅರ್ಜಿ ಸ್ವೀಕೃತಿ ಪ್ರತಿ
(v) ಅರ್ಜಿಯ ನಕಲು ಪ್ರತಿ

**15. ವಿಶೇಷ ಸೂಚನೆಗಳು**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

(2) ಅಂಚೆ ಮೂಲಕ ಅರ್ಜಿಗಳನ್ನು ಸಲ್ಲಿಸಬಯಸುವ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಅಡಕಗಳೊಂದಿಗೆ, ನೇರವಾಗಿ ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, "ಉದ್ಯೋಗ ಸೌಧ",

ಬೆಂಗಳೂರು – 560 001 ಇವರಿಗೆ ಮಾತ್ರ ಕಳುಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಪ್ರಾಂತೀಯ ಕಛೇರಿಗಳಿಗೆ ಅಂಚೆ ಮೂಲಕ ಕಳುಹಿಸತಕ್ಕದ್ದಲ್ಲ.

(3) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿರುವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು.

(4) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

(5) ಅಭ್ಯರ್ಥಿಗಳು ಅರ್ಜಿಗಳನ್ನು ಸ್ಪಷ್ಟವಾಗಿ ಆಂಗ್ಲ ಭಾಷೆಯಲ್ಲಿ (In Capital letters) ದಪ್ಪ ಅಕ್ಷರಗಳಲ್ಲಿ ಭರ್ತಿ ಮಾಡತಕ್ಕದ್ದು.

(6) **ಅಪೂರ್ಣವಾಗಿರುವ, ಫೋಟೋ ಲಗತ್ತಿಸಿಲ್ಲದ ಮತ್ತು ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

(7) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೂ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಇಲ್ಲದಿದ್ದಲ್ಲಿ ಅಥವಾ ತಪ್ಪು ಮಾಹಿತಿ ನೀಡಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(8) ವ್ಯಕ್ತಿತ್ವ ಪರೀಕ್ಷೆಗೆ ಆಯ್ಕೆಯಾಗುವ ಅಭ್ಯರ್ಥಿಗಳು ವ್ಯಕ್ತಿತ್ವ ಪರೀಕ್ಷೆಯ ಸಮಯದಲ್ಲಿ ಅರ್ಜಿಯೊಂದಿಗೆ ಲಗತ್ತಿಸಿದ ದಾಖಲೆಗಳ ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

(9) ಆಯ್ಕೆಯಾದ ಅಭ್ಯರ್ಥಿಗಳನ್ನು "ಡಿಪ್ಲೋಮಾ ಕೋರ್ಸ್ ಇನ್ ಫಾರೆಸ್ಟ್ರಿ" ಅಧ್ಯಯನಕ್ಕಾಗಿ ರಾಜ್ಯ ಅರಣ್ಯ ಸೇವೆ ತರಬೇತಿ ಕಾಲೇಜಿಗೆ ಅಥವಾ ಭಾರತ ಸರ್ಕಾರದಿಂದ ಮಾನ್ಯತೆ ಪಡೆದ ತರಬೇತಿ ಕಾಲೇಜಿಗೆ ತರಬೇತಿಗಾಗಿ ಕಳುಹಿಸಲಾಗುತ್ತದೆ. ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿದ ಅಭ್ಯರ್ಥಿಗಳನ್ನು 2 ವರ್ಷಗಳ ಪರೀಕ್ಷಾರ್ಥ ಅವಧಿಗೆ ಆಯ್ಕೆ ಮಾಡಲಾಗುತ್ತದೆ. ತರಬೇತಿಯನ್ನು ಪರೀಕ್ಷಾರ್ಥಕ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸದ ಅಭ್ಯರ್ಥಿಗಳನ್ನು ಹುದ್ದೆಯಿಂದ ಬಿಡುಗಡೆ ಮಾಡಲಾಗುತ್ತದೆ ಅಲ್ಲದೆ ತರಬೇತಿಗೆ ಸೇರುವಾಗ ಅಭ್ಯರ್ಥಿಗಳು ನೀಡುವ ನಷ್ಟ ಭರ್ತಿ ಬಾಂಡ್ ಮೇರೆಗೆ ತರಬೇತಿ ಖರ್ಚನ್ನು ವಸೂಲು ಮಾಡಲಾಗುತ್ತದೆ.

16. **ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ಪ್ರಮಾಣ ಪತ್ರಗಳು:–**

(i) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಗೆ ಸಂಬಂಧಿಸಿದ ಘಟಿಕೋತ್ಸವದ ಪ್ರಮಾಣ ಪತ್ರ, ಎಲ್ಲಾ ವರ್ಷದ ಅಂಕಪಟ್ಟಿಗಳನ್ನು ಲಗತ್ತಿಸತಕ್ಕದ್ದು.

(ii) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣ ಪತ್ರ (T.C) /ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ. (Extract of the Cumulative Record)

(iii) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕನಾಗಿ ವಯೋಮಿತಿ ಸಡಿಲಿಕೆ ಕೋರಿದ್ದಲ್ಲಿ)

(iv) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ – 2ಎ, 2ಬಿ, 3ಎ, 3ಬಿಗಳ ಪ್ರಮಾಣ ಪತ್ರಗಳು.

(v) ಸಹಾಯಕ ಶಸ್ತ್ರ ಚಿಕಿತ್ಸಕರಿಗಿಂತ ಕಡಿಮೆ ಇಲ್ಲದ ದರ್ಜೆಯ ವೈದ್ಯಾಧಿಕಾರಿಯವರಿಂದ ದೃಢೀಕರಿಸಲ್ಪಟ್ಟ ದೇಹದಾರ್ಢ್ಯತಾ (Physical Fitness Certificate) ಪ್ರಮಾಣ ಪತ್ರದ ಪ್ರತಿ.

(vi) ಇಂಡಿಯನ್ ಪೋಸ್ಟಲ್ ಆರ್ಡರ್ / ಬ್ಯಾಂಕ್ ಡ್ರಾಫ್ಟ್ (ಡಿ.ಡಿ)

ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸುವ ಪ್ರಮಾಣ ಪತ್ರಗಳಿಗೆ ಪುಟ ಸಂಖ್ಯೆಯನ್ನು ನೀಡಿ ಅದನ್ನು ಚೆಕ್‌ಲಿಸ್ಟ್‌ನಲ್ಲಿ ನಮೂದಿಸತಕ್ಕದ್ದು ಹಾಗೂ ಅರ್ಜಿಯೊಂದಿಗೆ ನೀಡಿರುವ ಚೆಕ್‌ಲಿಸ್ಟ್‌ನ ಎರಡೂ ಪ್ರತಿಗಳನ್ನು ಸೂಕ್ತವಾಗಿ ಭರ್ತಿ ಮಾಡಿ ತಪ್ಪದೆ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು/ಅಡಕಗಳನ್ನು ತಿರಸ್ಕರಿಸಲಾಗುವುದು.**

**ಸೂಚನೆ:–ಅಭ್ಯರ್ಥಿಗಳು ನಿಗದಿಪಡಿಸಿದ ಶುಲ್ಕವನ್ನು ಸಂದಾಯ ಮಾಡದಿದ್ದಲ್ಲಿ, ಮೇಲ್ಕಂಡ ಅವಶ್ಯಕ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸದ ಮತ್ತು ಅರ್ಜಿಯ ನಿಗದಿತ ಅಂಕಣಗಳಲ್ಲಿ ಸಹಿ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

17. **ದುರ್ನಡತೆ**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ;

ಎ) ಅವನು ಅಭ್ಯರ್ಥಿಯಾಗಿರುವ ಪರೀಕ್ಷೆಯಿಂದ ಅವನನ್ನು ಆಯೋಗವು ಅನರ್ಹಗೊಳಿಸುವ ಅಥವಾ

ಬಿ) i) ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಆಯ್ಕೆ ಆಗುವುದರಿಂದ ಮತ್ತು

ii) ರಾಜ್ಯ ಸರ್ಕಾರಿ ಸೇವೆಗಳಲ್ಲಿನ ನಿಯೋಜನೆಯಿಂದ ಖಾಯಂ ಆಗಿ ಅಥವಾ ನಿರ್ದಿಷ್ಟ ಅವಧಿಗೆ ಡಿಬಾರ್ ಮಾಡಲಾಗುವ ಶಿಸ್ತು ಕ್ರಮಕ್ಕೂ ಒಳಪಡುತ್ತಾರೆ.

**ವಿ.ಬಿ. ಪಾಟೀಲ್**

ಪಿ.ಆರ್. 456 ಕಾರ್ಯದರ್ಶಿ

ಕರ್ನಾಟಕ ಲೋಕ ಸೇವಾ ಆಯೋಗ.

## ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚನ್ನರಾಯಪಟ್ಟಣ

### ಹರಾಜು ಪ್ರಕಟಣೆ

**ಸಂ: ಸಕೃನಿ:ಚ:ಲೆಕ್ಕ–2:ವಾಹನ ಹರಾಜು:2008–09, ದಿನಾಂಕ: 1ನೇ ಆಗಸ್ಟ್ 2008**

ಹಾಸನ ಜಿಲ್ಲಾ ಪಂಚಾಯತ್, ಹಾಸನ ರವರ ಪತ್ರದ ಸಂಖ್ಯೆ:ಜಿಪಂಹಾ:ಆಡಳಿತ[1]:ವಾ:03:2005–06/ ದಿನಾಂಕ:15.2.2006 ಮತ್ತು ಜಂಟಿ ಕೃಷಿ ನಿರ್ದೇಶಕರು, ಹಾಸನ ರವರ ಪತ್ರದ ಸಂಖ್ಯೆ:ಜಕೃನಿ:ಹಾ:ಲೆಕ್ಕ–6:ಅವಾವಿ:60:2007–08:ದಿ:17.6.2008ರ ಪ್ರಕಾರ ಈ ಕೆಳಕಂಡ [ಮೂರು] ಜೀಪುಗಳಿಗೆ ವಿಲೇ ಮಾಡಲು ಅನುಮತಿ ನೀಡಿರುತ್ತಾರೆ. ಅನುಪಯುಕ್ತ ಹಳೇ ಜೀಪು ಈ ಕಛೇರಿಯ ಆವರಣದಲ್ಲಿ ಎಲ್ಲಿದೆಯೋ, ಹೇಗಿದೆಯೋ ಹಾಗೇ ದಿನಾಂಕ:6.9.2008 ರಂದು ಮಧ್ಯಾಹ್ನ 3.00 ಗಂಟೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಕೆಳಗೆ ಸಹಿ ಮಾಡಿರುವವರು ಸಾರ್ವಜನಿಕ ಬಹಿರಂಗ ಹರಾಜಿನ ಮೂಲಕ ಹರಾಜು ಮಾಡುತ್ತಾರೆಂದು ಈ ಮೂಲಕ ತಿಳಿಸಲಾಗಿದೆ. ಹರಾಜಿನಲ್ಲಿ ಭಾಗವಹಿಸಲು ಇಷ್ಟಪಡುವ ಸಾರ್ವಜನಿಕರು ವಾಹನವನ್ನು ಈ ಕಛೇರಿಯ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ಪರಿಶೀಲಿಸಬಹುದು. ಹರಾಜು ಷರತ್ತು ನಮೂನೆಯನ್ನು ಈ ಕಛೇರಿಯಲ್ಲಿ ಪಡೆದುಕೊಳ್ಳಬಹುದು.

### ಷರತ್ತುಗಳು

ದಿನಾಂಕ:06.09.2008 ರಂದು ಈ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮಾಡಲಿರುವ [ವಾಹನ] ಜೀಪಿನ ಮಾರಾಟ ಷರತ್ತುಗಳು.

1] ಎಂ.ವೈ.ಕ್ಯೂ – 937 ಜೀಪು 06.05.1966

2] ಎಂ.ಇ.ಓ – 4660 ಜೀಪು 16.05.1974

3] ಎಂ.ವೈ.ಹೆಚ್.1397 ಜೀಪು 28.04.1970

1. ಹರಾಜಿನಲ್ಲಿ ಸವಾಲು ಮಾಡುವ ಇಚ್ಛೆಯುಳ್ಳ ಪ್ರತಿಯೊಬ್ಬ ಸವಾಲುದಾರನು ಮುಂಗಡವಾಗಿ ಮೂರು ವಾಹನಗಳಿಗೆ ಇ.ಎಂ.ಡಿ. ಹಣ ರೂ.6000–00 [ಆರು ಸಾವಿರ] ಗಳನ್ನು ಠೇವಣಿಯಾಗಿ ದಿನಾಂಕ:04.09.2008 ರೊಳಗಾಗಿ ಕಟ್ಟಿ ಹರಾಜಿನಲ್ಲಿ ಭಾಗವಹಿಸಲು ಅರ್ಹತೆ ಪಡೆಯಬೇಕು.
2. ಅಂತಿಮ ಸವಾಲುದಾರನೆಂದು ನಿರ್ಧರಿಸಲಾದ ವ್ಯಕ್ತಿಯು ಜೀಪು ಮಾರಾಟವಾದ ಕೂಡಲೇ ಸವಾಲಿನ ಮೇಲೆ ನಿರ್ಧರಿಸಲಾದ ಹಣದ ಶೇ.50% ಭಾಗ [ಅರ್ಧಭಾಗ] ಇ.ಎಂ.ಡಿ. ಸೇರಿ ಸ್ಥಳದಲ್ಲಿಯೇ ಪಾವತಿಸತಕ್ಕದ್ದು.
3. ಒಂದು ವೇಳೆ ಸವಾಲುದಾರರು ಬಿಡ್ಡಿನ ಅರ್ಧಭಾಗ ಹಣವನ್ನು ಸ್ಥಳದಲ್ಲಿಯೇ ಪಾವತಿಸದಿದ್ದಲ್ಲಿ ಅವರ ಇ.ಎಂ.ಡಿ.ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಂತಹ ಬಿಡ್ಡುದಾರನಿಗೆ ಹರಾಜಿನಲ್ಲಿ

ಭಾಗವಹಿಸುವ ಅಧಿಕಾರವನ್ನು ನೀಡುವುದಿಲ್ಲ. ಅಲ್ಲದೇ ಪುನಃ ಅದೇ ಸ್ಥಳದಲ್ಲಿ ಮರು ಹರಾಜನ್ನು ನಡೆಸಲಾಗುವುದು.

4. ಹರಾಜು ಮುಗಿದ ನಂತರ ಅತಿ ಹೆಚ್ಚು ಬಿಡ್ಡು ಮಾಡಿರುವ ಯಾವುದೇ ಬಿಡ್ಡನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಹಾಸನ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಮಾತ್ರ ಇರುತ್ತದೆ.
5. ಒಂದು ವೇಳೆ ಬಿಡ್ಡನ್ನು ಒಪ್ಪಿಕೊಂಡ ನಂತರ ಬಿಡ್ಡುದಾರನಿಗೆ ತಿಳಿಸಿದ ದಿನಾಂಕದಿಂದ 10 ದಿನದೊಳಗಾಗಿ ಉಳಿದ ಅರ್ಧಭಾಗ ಹಣವನ್ನು ಕಟ್ಟಿ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯ ಒಳಗೆ ಹಣ ಕಟ್ಟದೆ ವಾಹನಗಳನ್ನು ತೆಗೆದು ಕೊಳ್ಳದಿದ್ದಲ್ಲಿ ಈಗಾಗಲೇ ಪಾವತಿಸಿರುವ ಅರ್ಧಭಾಗದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಒಂದು ವೇಳೆ ಬಿಡ್ಡುದಾರನು ಬಿಡ್ಡಿನ ಹಣವನ್ನು ಕಟ್ಟದೆ ವಾಹನಗಳನ್ನು ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ಮರು ಹರಾಜನ್ನು ಮಾಡಲು ಪುನಃ ದಿನಾಂಕವನ್ನು ನಿಗದಿಗೊಳಿಸಿ ಹರಾಜು ಕ್ರಮ ಜರುಗಿಸಲಾಗುವುದು.
7. ಮಾರಾಟವನ್ನು ನಡೆಸುವ ಅಧಿಕಾರಿಗಳು ಸವಾಲನ್ನು ಪುರಸ್ಕರಿಸುವ ಇಲ್ಲದೆ ತಿರಸ್ಕರಿಸುವ ಹಕ್ಕನ್ನು ಹೊಂದಿರುತ್ತಾರೆ.
8. ಮಾರಾಟವು ಸಂದರ್ಭಾನುಸಾರ ಇಲಾಖೆಯ ಅಧಿಕಾರಸ್ಥರಿಂದ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತದೆ.
9. ಮಾರಾಟ ಸ್ಥಿರಗೊಳಿಸಲ್ಪಟ್ಟ ಮೇಲೆ ಅತಿ ಹೆಚ್ಚು ಬೆಲೆಗೆ ಕೂಗಿದ ಸವಾಲುದಾರನಿಗೆ ಜೀಪುಗಳನ್ನು ಹಾಸನ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಅನುಮೋದನೆ ದೊರೆತ ನಂತರ ಜೀಪನ್ನು ಒಪ್ಪಿಸಲಾಗುವುದು. ಅಲ್ಲದೆ ಕರ್ನಾಟಕ ಮಾರಾಟ ತೆರಿಗೆ ನಿಯಮದ ಪ್ರಕಾರ ಅನ್ವಯವಾಗುವ ಎಲ್ಲಾ ತೆರಿಗೆಗಳನ್ನು ಪಾವತಿಸತಕ್ಕದ್ದು.
10. ವಾಹನವು ಎಲ್ಲಿದೆಯೋ ಹೇಗಿದೆಯೋ ಅದೇ ಸ್ಥಿತಿಯಲ್ಲಿ ಜೀಪನ್ನು ಕೊಳ್ಳಲು ಇಚ್ಛೆಯುಳ್ಳವರು ಪ್ರಕಟಣೆಯ ದಿನಾಂಕದಿಂದ ಮಾರಾಟದ ದಿನಾಂಕದವರೆಗೆ ಈ ಕಛೇರಿಯ ಎಲ್ಲಾ ದಿನಗಳಲ್ಲಿ ಬೆಳಿಗ್ಗೆ 10–00 ಗಂಟೆಯಿಂದ ಸಂಜೆ 5–30ರ ಸಮಯದವರೆಗೆ ನೋಡಲು ಅವಕಾಶವಿರುತ್ತದೆ.

ಸಹಾಯಕ ಕೃಷಿ ನಿರ್ದೇಶಕರು
ಪಿ.ಆರ್. 450 ಚನ್ನರಾಯಪಟ್ಟಣ, ಹಾಸನ ಜಿಲ್ಲೆ.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**
**ಸರ್ಕಾರಿ ಕೇಂದ್ರ ಮುದ್ರಣಾಲಯ, ಆರ್.ವಿ. ಕಾಲೇಜ್ ಪೋಸ್ಟ್, 8ನೇ ಮೈಲಿ, ಮೈಸೂರು ರಸ್ತೆ, ಬೆಂಗಳೂರು – 560 059**
**ಟೆಂಡರ್ ಅಧಿಸೂಚನೆ**
**ಸಂಖ್ಯೆ: ಸಕೇಮು./ಪಿಯುಆರ್/ಸಿ–24/ /2008–09, ದಿನಾಂಕ: 12ನೇ ಆಗಸ್ಟ್ 2008**

ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ವಿವಿಧ ಸರ್ಕಾರಿ ಮುದ್ರಣಾಲಯಗಳಲ್ಲಿ ಲಭ್ಯವಿರುವ ಅಲ್ಯೂಮಿನಿಯಂ / ಪಿ.ಎಸ್. ಪ್ಲೇಟುಗಳು ಮತ್ತು ನಿರುಪಯುಕ್ತ ಲೈನೋ / ಮೋನೋ ಮೆಟಲ್ ಟೈಪ್‌ಗಳ ವಿಲೇವಾರಿಗಾಗಿ ಅರ್ಹ ಸಂಸ್ಥೆಗಳಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ನಿಗಧಿತ ಟೆಂಡರ್ ಫಾರಂ ಅನ್ನು ರೂ.1,000/– + ತೆರಿಗೆ ರೂ.125/– ನ್ನು ನಗದು ರೂಪದಲ್ಲಿ ಈ ಕಛೇರಿಯಲ್ಲಿ ಪಾವತಿಸಿ ದಿನಾಂಕ 12.9.2008ರ 4–30 ಗಂಟೆಯವರೆಗೆ ಪಡೆಯಬಹುದಾಗಿದೆ. ಮೊಹರಾದ ಟೆಂಡರ್ ಲಕೋಟೆಯನ್ನು ಸ್ವೀಕರಿಸಲು ಕೊನೆಯ ದಿನಾಂಕ 15.9.2008ರ 3–00 ಗಂಟೆಯವರೆಗೆ ಹೆಚ್ಚಿನ ಮಾಹಿತಿಗಾಗಿ ಮೇಲ್ಕಂಡ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ನಿರ್ದೇಶಕರು

**OFFICE OF THE DIRECTOR OF PRINTING, STATIONERY AND PUBLICATIONS**
**Government Central Press, R.V. College Post, 8th Mile, Mysore Road, Bangalore - 560 059**
**BRIEF TENDER NOTIFICATION**
**Letter No.DPS/PUR/C-24/ /2008-09, Dated: 12th August 2008**

Sealed Tenders are invited from the eligible firms for disposal of obselete Alluminium P.S. Plates and Mono / Metal types by open Tender basis at the various Government Presses of the Department of Printing, Stationery & Publications. Prescribed Tender Forms can be obtained at the above address by paying Rs.1,000/- + VAT Rs.125/- by way of cash upto 4-30 p.m. on 12.9.2008. The last date for receipt of Tender is 15.9.2008 upto 3.00 p.m. Further details can be had from this office during office hours.

P.R. 461 Director